# ಬೇಲೂರು ದೇವಾಲಯ ಭಿತ್ತಿ ಶಿಲ್ಪಗಳ ಮೇಲೆ ಜೈನ ಯಕ್ಷ–ಯಕ್ಷಿಯರ ಪ್ರಭಾವ*

**ದೇವರ ಕೊಂಡಾರೆಡ್ಡಿ**

ಬೇಲೂರು ಚನ್ನಕೇಶವ ದೇವಾಲಯವು ಶ್ರೀ ವೈಷ್ಣವ ಮತಸ್ಥರ ಪ್ರಮುಖ ದೇವಾಲಯ. ಶ್ರೀರಾಮಾನುಜಾಚಾರ್ಯರು ಕರ್ನಾಟಕಕ್ಕೆ ಬಂದಾಗ ಜೈನನಾಗಿದ್ದ ಹೊಯ್ಸಳ ಬಿಟ್ಟಿದೇವನು ಶ್ರೀ ವೈಷ್ಣವ ಧರ್ಮವನ್ನು ಸ್ವೀಕರಿಸಿ ವಿಷ್ಣುವರ್ಧನನೆಂಬ ಹೆಸರನ್ನು ಇಟ್ಟುಕೊಂಡನೆಂದೂ, ಬೇಲೂರಿನಲ್ಲಿ ಚನ್ನಕೇಶವ ದೇವಾಲಯವನ್ನು ಕಟ್ಟಿಸಿದನೆಂದೂ ಪ್ರತೀತಿ. ಈ ಕಥೆಯ ಸತ್ಯಾಸತ್ಯತೆ ಏನೇ ಆಗಿದ್ದರೂ ಈ ದೇವಾಲಯವನ್ನು ಕ್ರಿ.ಶ. ೧೧೧೭ರಲ್ಲಿ ವಿಷ್ಣುವರ್ಧನನು ಕಟ್ಟಿಸಿದ್ದು ಚಾರಿತ್ರಿಕ ಸಂಗತಿಯಾಗಿದೆ.[1] ಆದರೂ ದೇವಾಲಯವನ್ನು ಪೂರ್ಣವಾಗಿ ಗಮನಿಸಿದಾಗ ಇದು ಎರಡು ಹಂತಗಳಲ್ಲಿ ನಿರ್ಮಾಣವಾದಂತೆ ಕಂಡು ಬರುತ್ತದೆ. ಗರ್ಭಗೃಹದ ಭಾಗವು ಮುಂದಿನ ನವರಂಗದ ಭಾಗಕ್ಕಿಂತ ಭಿನ್ನವಾಗಿದೆ.ಹಿಂಬದಿಯ ಗರ್ಭಗೃಹ ಅದಿಷ್ಠಾನವು ಸಾಧಾರಣವಾಗಿದ್ದು ಅಧಿಷ್ಠಾನ ಮುಗಿದ ಮೇಲೆ ಭಿತ್ತಿ ಪ್ರಾರಂಭವಾಗುತ್ತದೆ. ಭಿತ್ತಿಯಲ್ಲಿ ಎತ್ತರವಾದ ಶಿಲ್ಪಗಳಿವೆ. ಅಧಿಷ್ಠಾನದಲ್ಲಿ ಕೆತ್ತನೆಗಳು ಹೆಚ್ಚಾಗಿಲ್ಲ. ಗರ್ಭಗೃಹದ ಮೂರು ಕಡೆ ಕೋಷ್ಟ ಮಂಟಪಗಳಿದ್ದು ಇವು ನಂತರದ ಸೇರ್ಪಡೆಯೆಂಬಂತೆ ಕಾಣಬರುತ್ತವೆ. ಹಿಂದುಗಡೆಯ ದೇವಕೋಷ್ಠದ ವಿಗ್ರಹದ ಪೀಠದಲ್ಲಿ "ಲೊಕ್ಕಿ ಗುಂಡಿಯರ ಭವಾಂ ಬೊಂಡೋಜಸವ ಬಲರದೇವ ಬಿರುದ ರೂವಾರೀಭ ಕಂಠೀರವಂಚತುಂ....ಸೋವಿರಾದ ರೂವಾರಿಗೊನ್ದಳ ಬಡಿವ ಕಲಿಯುಗ ವಿಶ್ವಕರ್ಮನೆಂಬ ರೂವಾರಿಯ ಪ್ರೊಯಿಸಿದು" ಎಂಬ ಶಾಸನವಿದೆ. ದೇವಾಲಯದ ಹೊರಭಾಗದ ವಲಭಿ ಭಾಗದಲ್ಲಿರುವ ಮದನಕೈ ಅಥವಾ ಸಾಲಬಂಜಿಕೆ ಶಿಲ್ಪಗಳಲ್ಲಿ ಅನೇಕವುಗಳ ಮೇಲೆ ಬರೆಹವಿದ್ದು, ಅವು ರೂವಾರಿಚಿಕ್ಕ ಹಂಪ, ಬಳ್ಳಿಗಾವೆಯ ರೂವಾರಿ ದಾಸೋಜ, ಬಳ್ಳಿಗಾವೆಯ ರೂವಾರಿ ದಾಸೋಜನ ಪುತ್ರ ಚಾವಣ, ಮುಂತಾದವರು ಬಿಡಿಸಿದ ಶಿಲ್ಪಗಳೆಂದು ತಿಳಿಯುತ್ತದೆ. ಈ ಶಾಸನಗಳ ಆಧಾರದಿಂದ ಈ ದೇವಾಲಯದ ರಚನೆಯಲ್ಲಿ ಗದಗು ಮತ್ತು

---

* ಈ ಲೇಖನವನ್ನು ಯದುಗಿರಿ ಯತಿರಾಜ ಮಠದ ಪೀಠಾಧಿಪತಿಗಳಾದ ಶ್ರೀ ರಾಮಾನುಜ ಸಂಪತ್ಕುಮಾರಜೀಯರ್ ಅವರು ಹಿಂದೊಮ್ಮೆ ತಮ್ಮ ಭಾಷಣದಲ್ಲಿ 'ಬೇಲೂರು ದೇವಾಲಯವನ್ನು ಜೈನ ಬಸದಿಯಾಗಿ ಕಟ್ಟಲು ಆರಂಭಿಸಿ ಅನಂತರ ಅದನ್ನು ವಿಷ್ಣುದೇವಾಲಯವಾಗಿ ಪರಿವರ್ತಿಸಿದರು' ಎಂಬ ಅಂಶದ ಆಧಾರದ ಮೇಲೆ ದೇವಾಲಯದ ಶಿಲ್ಪಗಳನ್ನು ಗಮನಿಸಿ ಬರೆಯಲಾಗಿದೆ. ಶ್ರೀಯವರ ಅಭಿಪ್ರಾಯಕ್ಕೆ ಚಾರಿತ್ರಿಕ ಆಧಾರಗಳು ಇಲ್ಲವಾದರೂ ಬೇಲೂರು ಚನ್ನಕೇಶವ ದೇವಾಲಯದಲ್ಲಿನ ಭಿತ್ತಿ ಶಿಲ್ಪಗಳಲ್ಲಿ ಯಕ್ಷ-ಯಕ್ಷಿಯ ಅಂಶಗಳು ಕಂಡು ಬಂದಿದ್ದು ಆ ಬಗ್ಗೆ ಇಲ್ಲಿ ವಿವೇಚಿಸಲಾಗಿದೆ. ಈ ಬಗೆಯ ಶಿಲ್ಪಗಳು (ಯಕ್ಷ-ಯಕ್ಷಿ ಅಂಶದ) ಬೇಲೂರಿನ ಚನ್ನಕೇಶವ ದೇವಾಲಯಕ್ಕೆ ಮಾತ್ರ ಸೀಮಿತವಾಗಿರದೆ ಅನೇಕ ಹೊಯ್ಸಳ ದೇವಾಲಯಗಳಲ್ಲಿ ಕಾಣ ಬರುತ್ತವೆ.

1 ಎ.ಕ. IX ಬೇಲೂರು ೫೮ ಮತ್ತು ೭೧ ; ಕ್ರಿ.ಶ. ೧೧೧೭

ಬಳ್ಳಿಗಾವೆಯ ಕಡೆಯಿಂದ ಬಂದ ಶಿಲ್ಪಿಗಳ ಪಾತ್ರ ಮಹತ್ತರವಾದದ್ದು ಎಂದು ತಿಳಿಯುತ್ತದೆ.

ಬೇಲೂರು ದೇವಾಲಯದ ಭಿತ್ತಿ ಶಿಲ್ಪಗಳನ್ನು ಗಮನಿಸಿದಾಗ ನಮಗೆ ದೇವ ದೇವಿಯರ ಶಿಲ್ಪಗಳ ಮಧ್ಯೆ ಕೆಲವು ಜೈನ ಯಕ್ಷ ಮತ್ತು ಯಕ್ಷಿ ಶಿಲ್ಪಗಳನ್ನು ಹೋಲುವ ಭಿತ್ತಿ ಶಿಲ್ಪಗಳು ಕಾಣಬರುತ್ತವೆ. ಕೆಲವಂತೂ ಯಕ್ಷ-ಯಕ್ಷಿಯ ಶಿಲ್ಪಗಳಂತೆಯೇ ಭಾಸವಾಗುತ್ತವೆ. ಒಂದು ವ್ಯತ್ಯಾಸವೆಂದರೆ ಈ ದೇವಾಲಯದ ಭಿತ್ತಿಯಲ್ಲಿ ಕಾಣುವ ಯಕ್ಷಿ ಶಿಲ್ಪಗಳು ನಿಂತ ನಿಲುವಿನಲ್ಲಿದ್ದರೆ ಬಹುತೇಕ ಜೈನ ಬಸದಿಗಳ ಯಕ್ಷಿ ಶಿಲ್ಪಗಳು ಕುಳಿತ ಭಂಗಿಯಲ್ಲಿರುತ್ತವೆ. ಅಂಗಡಿ ಬಸದಿಯಲ್ಲಿ ನಿಂತ ಯಕ್ಷಿಯ ಶಿಲ್ಪವಿದೆ. ಬೇಲೂರ ಭಿತ್ತಿ ಶಿಲ್ಪಗಳಲ್ಲಿ ಯಕ್ಷಿಯರಂತಿರುವ ಶಿಲ್ಪಗಳ ಬಳಿ ಯಾವುದೇ ವಾಹನವಿಲ್ಲ. ಈ ಕೆಲವು ವ್ಯತ್ಯಾಸಗಳನ್ನು ಬಿಟ್ಟರೆ ಯಕ್ಷಿ ಶಿಲ್ಪಕ್ಕೂ ಇಲ್ಲಿನ ಭಿತ್ತಿ ಶಿಲ್ಪದಲ್ಲಿ ಬಂದಿರುವ ಯಕ್ಷಿಯರನ್ನು ಹೋಲುವ ಶಿಲ್ಪಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲ. ಯಕ್ಷ ಶಿಲ್ಪಗಳು ಕುಳಿತ ಭಂಗಿಯಲ್ಲಿದ್ದು ಜೈನ ಬಸದಿಗಳಲ್ಲೂ ಕುಳಿತ ಭಂಗಿಯಲ್ಲಿಯೇ ಇರುತ್ತವೆ.

ಈ ಹಿನ್ನೆಲೆಯಲ್ಲಿ ಬೇಲೂರ ಚನ್ನಕೇಶವ ದೇವಾಲಯದ ಭಿತ್ತಿಯ ಶಿಲ್ಪಗಳನ್ನು ಗಮನಿಸಿದಾಗ ಶಿಲ್ಪಿಯು ಎಲ್ಲಾ ಯಕ್ಷ ಮತ್ತು ಯಕ್ಷಿಯ ಬಿಂಬಗಳನ್ನು ಅನುಕರಣೆ ಮಾಡಿಲ್ಲ. ತೀರ್ಥಂಕರನ ಪಕ್ಕದಲ್ಲಿರುವ ಯಕ್ಷ ಮತ್ತು ಯಕ್ಷಿಯರ ಬಿಂಬಗಳು ಆಸೀನರಾಗಿದ್ದು, ಜ್ವಾಲಮಾಲಿನಿ, ಕಾಳಿ, ಚಕ್ರೇಶ್ವರಿ, ಸರಸ್ವತಿ ಬಿಂಬಗಳನ್ನು ಬಿಟ್ಟರೆ ಉಳಿದವುಗಳಿಗೆ ಎರಡೇ ಕೈಗಳು. ಇಲ್ಲಿನ ಭಿತ್ತಿ ಶಿಲ್ಪಗಳ ಪ್ರಮುಖ ಅಂಶವೆಂದರೆ ಒಂದು ಕೈಯಲ್ಲಿ ಫಲವನ್ನು ಹಿಡಿದಿರುವಂತೆಯೂ ಇನ್ನೊಂದು ಕೈಯಲ್ಲಿ ಮಾವಿನ ಹಣ್ಣಿನಗೊಂಚಲು ಅಥವಾ ಪುಷ್ಪಗುಚ್ಛವನ್ನೂ ಹಿಡಿದಿರುವಂತೆಯೂ ಬಿಡಿಸಿರುತ್ತಾರೆ. ಇಂತಹ ಅನೇಕ ಶಿಲ್ಪಗಳನ್ನು ಬಿಡಿಸಿದ್ದು ಅವುಗಳ ವಿವರವನ್ನು ಈಗ ನೋಡೋಣ.

ದೇವಾಲಯುವನ್ನು ಅಪ್ರದಕ್ಷಿಣೆಯಾಗಿ ಗಮನಿಸುತ್ತಾ ಹೋದಾಗ ದೇವಾಲಯದ ಮುಂಭಾಗದ ಭಿತ್ತಿಯಲ್ಲಿ ಅಲಂಕಾರಿಕ ತೋರಣಗಳ ಒಳಗೆ ಎಂಟು ಮದನ ಕೈ ವಿಗ್ರಹಗಳಿದ್ದು ಮೂರು ಶಿಲ್ಪಗಳಲ್ಲಿ ಒಂದು ಕೈಯಲ್ಲಿ ಫಲ ಇನ್ನೊಂದರಲ್ಲಿ ಹೂಗೊಂಚಲುಗಳನ್ನು ಕಾಣಬಹುದು. ಶಿಲ್ಪಗಳ ನಡುವೆ ಆಸೀನ ಯಕ್ಷನನ್ನು ಹೋಲುವ ಶಿಲ್ಪಗಳಿವೆ. ಈ ಸಾಲಿನ ಮೇಲಿನ ಶಿಲ್ಪವೂ ಇದೇ ಲಕ್ಷಣಗಳನ್ನು ಹೊಂದಿದೆ. ಭಾಗವತದ ಶಿಲ್ಪವಿರುವ ಸಾಲಿನಲ್ಲಿ ೪-೫ ಶಿಲ್ಪಗಳು ಇವುಗಳಲ್ಲಿ ಒಂದರಲ್ಲಿ ಅಂಬಿಕಾ ಯಕ್ಷಿ ಶಿಲ್ಪದಂತೆ ಎರಡೂ ಕಡೆ ಮಕ್ಕಳನ್ನು ನಿಲ್ಲಿಸಿದೆ. ಉಳಿದ ಶಿಲ್ಪಗಳ ಕೈಲಿ ಕಮಲ ಮತ್ತು ಫಲವಿದೆ. ಕೆಲವು ಶಿಲ್ಪಗಳ ಕೈಲಿ ಫಲ ಮತ್ತು ಚಾಮರವಿದೆ. ರಂಗನಾಥನ ಶಿಲ್ಪದ ಕೆಳಗಿನ ಸಾಲಿನಲ್ಲಿನ ಮಧ್ಯದ ಒಂದು ಶಿಲ್ಪದ ಎರಡೂ ಕಡೆ ಮಕ್ಕಳಿದ್ದು ಬಲಗೈಲಿ ಕಮಲ ಎಡಗೈ ಮಗುವಿನತಲೆಯ ಮೇಲೆ ಇದೆ. ಇವುಗಳ ಮಧ್ಯೆ ಯಕ್ಷರನ್ನು ಹೋಲುವ ಶಿಲ್ಪಗಳಿವೆ. ಮೇಲಿನ ಚಿಕಣಿ ಶಿಲ್ಪಗಳಲ್ಲಿಯೂ ಯಕ್ಷರನ್ನು ಹೋಲುವ ಶಿಲ್ಪಗಳಿವೆ. ಉತ್ತರ ದಿಕ್ಕಿನ ಬಾಗಿಲ ಬಳಿ ಎರಡು ಶಿಲ್ಪಗಳ ಕೈಲಿ ಫಲ ಮತ್ತು ಕಮಲವಿದೆ. ಕ್ರಿಸ್ತಶಕ ೧೧೬೯ನೇ ವರ್ಷದ ಶಾಸನದ ಕೆಳಗೆ ಇಂತಹ ಶಿಲ್ಪಗಳು ಮದನಿಕೆ ಶಿಲ್ಪಗಳ ಜೊತೆಯಲ್ಲಿ ಇದ್ದು ಈ ಶಿಲ್ಪಗಳ ಎರಡೂ ಕಡೆ ಮಕ್ಕಳ ಇಲ್ಲವೇ ಚಾಮರಧಾರಿಯರ ಚಿಕ್ಕ ಬಿಂಬಗಳಿವೆ. ಒಂದು ಶಿಲ್ಪದಲ್ಲಿ ಬಲಗೈಲಿ ಕಮಲವಿದ್ದು ಎಡಗೈ ಮಗುವನ್ನು ಎತ್ತಿಕೊಂಡಿರುವ ಹೆಂಗಸಿನ ತಲೆಯ ಮೇಲೆ ಇದೆ. ಈ ಭಾಗದಿಂದಾಚೆಗೆ ದೇವಾಲಯ ರಚನೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ದೇವಾಲಯದ ವಾಸ್ತು ರಚನೆ ಶಿಲ್ಪಗಳ ಗಾತ್ರ ಮುಂತಾದ ವಿವರಗಳು ಸು. ಕ್ರಿ.ಶ. ೧೧ನೇ ಶತಮಾನದ ಪೂರ್ವಾರ್ಧಕ್ಕೆ ಸೇರುತ್ತವೆ. ಈ ಭಾಗದ ಭಿತ್ತಿಯಲ್ಲಿ ಕ್ಷುದ್ರ ವಿಮಾನಗಳನ್ನು ಬಿಡಿಸಿದ್ದು ಇವುಗಳ ಕೋಷ್ಟದಲ್ಲಿ ಬಿಡಿಸಿರುವ ಶಿಲ್ಪಗಳು ಯಕ್ಷಿಯನ್ನೇ ಹೋಲುತ್ತವೆ. ಈ ಶಿಲ್ಪಗಳಲ್ಲಿ ಕೆಲವುಗಳ ಪಕ್ಕದಲ್ಲಿ ಮಕ್ಕಳು ಇವೆ.

ಮೇಲಿನ ಭಿತ್ತಿಯ ಸಾಲಿನಲ್ಲಿ ಒಬ್ಬ ಹೆಂಗಸು ಕತ್ತರಿ ಕಾಲಿನಲ್ಲಿ ನಿಂತಿದ್ದು ಬಲಗೈಲಿ ಹೂವಿನಗೊಂಚಲಿದ್ದು, ಎಡಗೈಲಿ ಐದು ಹಣ್ಣಿನ ಮಾವಿನ ಗೊಂಚಲನ್ನೂ ಹಿಡಿದಿದೆ. ಮಗುವೊಂದು ಈ ಮಾವಿನ ಹಣ್ಣಿನ ಗೊಂಚಲಿಗೆ ಕೈ ಹಾಕಿದೆ. ಇಲ್ಲಿಯೇ ಇರುವ ರತಿ ಮನ್ಮಥರ ಶಿಲ್ಪದ ಬಳಿ ಮೂಲೆಯಲ್ಲಿ ಒಬ್ಬ ಹೆಂಗಸಿನ ಬಲಗೈಲಿ ಪುಷ್ಪದ ಗೊಂಚಲು ಇದ್ದು ಎಡಗೈ

ಸಣ್ಣ ಮಗುವಿದ ತಲೆ ಮೇಲೆ ಇದೆ. ಬಲಗಡೆ ಚಿಕ್ಕ ಹೆಂಗಸಿನ ಶಿಲ್ಪವಿದೆ. ಭೈರವ ಶಿಲ್ಪದ ಹಿಂದೆ ಇಂತಹದೇ ಶಿಲ್ಪಗಳಿದ್ದು ಬಲಗೈಲಿ ಫಲ ಎಡಗೈಲಿ ಮಾವಿನ ಹಣ್ಣಿನ ಗೊಂಚಲನ್ನು ಹಿಡಿದಿರುತ್ತವೆ. ಮಾವಿನ ಹಣ್ಣಿನ ಗೊಂಚಲಲ್ಲಿ ಐದು ಹಣ್ಣುಗಳಿವೆ. ಇಲ್ಲಿಯು ದೇವ ಕೋಷ್ಠದ ಬಳಿ ಇರುವ ಇಬ್ಬರು ಹೆಂಗಸರ ಶಿಲ್ಪದಲ್ಲಿ ಒಂದು ಕೈಲಿ ಫಲ, ಇನ್ನೊಂದು ಕೈಲಿ ಚಾಮರವಿದೆ. ದೇವಾಲಯದ ಬಲ ಭಾಗದಲ್ಲಿ ಈ ಬಗೆಯ ಶಿಲ್ಪಗಳು ವಿರಳವಾಗಿ ದೊರೆಯುತ್ತವೆ. ಒಂದೆರಡು ಕಡೆ ಗೂಡು ಗಳಲ್ಲಿ ಯಕ್ಷರ ಶಿಲ್ಪಗಳನ್ನೇ ಬಿಡಿಸಿರುತ್ತಾರೆ. ದೇವಾ ಲಯದ ಮುಂಬದಿಯ ಕಡೆಗೆ ಬರುತ್ತಾ ಯಕ್ಷರ ಚಿಕಣಿ ಶಿಲ್ಪಗಳು ಎದ್ದು ಕಾಣುತ್ತವೆ. ಕೆಲವುದರ ಕೈಲಿ ಫಲ ಮತ್ತು ಕಮಲವಿದೆ. ಬಲಬಾಗಿಲು ದಾಟಿ ಮುಂದು ವರೆದರೆ ಮತ್ತೆ ಯಕ್ಷಿಯರ ಶಿಲ್ಪಗಳು ಕಾಣಬರುತ್ತವೆ. ಇಂತಹ ಕಡೆ ಒಂದೆರಡು ಶಿಲ್ಪಗಳಲ್ಲಿ ಒಂದು ಕೈಲಿ ನೇತಾ ಡುತ್ತಿರುವ ಮಾವಿನ ಹಣ್ಣಿನ ಗೊಂಚಲು ಇನ್ನೊಂದು ಕೈಲಿ ಫಲವಿದೆ. ಕೆಲವಡೆ ಮಾವಿನ ಹಣ್ಣಿಗೆ ಬದಲಾಗಿ ಚಾಮರವಿದೆ. ಒಂದು ಶಿಲ್ಪದಲ್ಲಿ ಹೆಂಗಸೊಬ್ಬಳು ಮಗುವನ್ನು ಎತ್ತಿಕೊಂಡಿದ್ದು ಇನ್ನೊಂದು ಕೈಲಿ ಫಲ ಹಿಡಿದಿದ್ದಾಳೆ. ಮುಂಭಾಗದ ಭಿತ್ತಿಯ ಕೆಳಗೆ ಒಂದು ಶಿಲ್ಪದಲ್ಲಿ ಬಲಗೈಲಿ ಮಾವಿನ ಹಣ್ಣು ಹಿಡಿದಿದ್ದು ಆ ಹಣ್ಣನ್ನು ಹುಡುಗನೊಬ್ಬ ಕೀಳುತ್ತಿದ್ದಾನೆ. ಎಡಗೈಲಿ ಫಲವಿದ್ದು ಆ ಕೈ ಮುಂಗೈ ಮೇಲೆ ಗಿಳಿ ಕುಳಿತಿದೆ. ಒಂದು ಶಿಲ್ಪಕ್ಕೂ ಇನ್ನೊಂದು ಶಿಲ್ಪಕ್ಕೂ ಮಧ್ಯೆ ಜಾಗ ವಿರುವೆಡೆಯಲ್ಲಿ ಕುಳಿತ ಯಕ್ಷರ ಶಿಲ್ಪಗಳನ್ನು ಬಿಡಿಸಿರು ತ್ತಾರೆ.

ಮೇಲೆ ವಿವರಿಸಿದ ಶಿಲ್ಪಗಳು ಬಹುತೇಕವಾಗಿ ಜೈನ ಬಸದಿಗಳಲ್ಲಿ ಕಾಣಬರುವ ಯಕ್ಷ ಮತ್ತು ಯಕ್ಷಿಯರ ಶಿಲ್ಪಗಳನ್ನೇ ಹೋಲುತ್ತವೆ. ದೇವಾಲಯದ ಎಡಭಾಗ ದಲ್ಲಿ ಕಾಣಬರುವಷ್ಟು ಈ ಶಿಲ್ಪಗಳು ಬಲಭಾಗದಲ್ಲಿಲ್ಲ ಇವನ್ನು ನೇರವಾಗಿ ಜೈನ ಯಕ್ಷ-ಯಕ್ಷಿ ಶಿಲ್ಪಗಳೆಂದು ಕರೆಯಲು ಸಾಧ್ಯವಿಲ್ಲವಾದರೂ ಅವು ಹಿಡಿದಿರುವ ಆಯುಧಗಳು ಇತ್ಯಾದಿಗಳಿಂದ ಹಿಂದೂ ದೇವತೆಗಳಲ್ಲವೆನ್ನ ಬಹುದು. ಹಿಂದೂ ದೇವತೆಗಳ ಕೈಲಿ ಫಲವಿರುವುದು ಕಡಿಮೆ. ಮತ್ತು ಕೈಗಳೂ ಸಹ ಎರಡಕ್ಕಿಂತ ಹೆಚ್ಚು. ಈ ಭಿತ್ತಿಗಳಲ್ಲಿ ಕಾಣಬಂದಿರುವ ಈ ಬಗೆಯ ಶಿಲ್ಪಗಳೆಲ್ಲ ಬಹುತೇಕ ಅಂಬಿಕಾ ಯಕ್ಷಿಯನ್ನು ಹೋಲುತ್ತವೆ. ಯಕ್ಷಿಯ ನಿಂತ ಶಿಲ್ಪ ನಮಗೆ ಅಂಗಡಿಯ ಬಸದಿಯಲ್ಲಿ ಕಾಣ ಬಂದಿದೆ. ಹೀಗಾಗಿ ಬೇಲೂರಿನ ಚನ್ನಕೇಶವ. ದೇವಾಲಯದ ಅನೇಕ ಭಿತ್ತಿ ಶಿಲ್ಪಗಳ ಮೇಲೆ ಯಕ್ಷ ಮತ್ತು ಯಕ್ಷಿಯರ ಶಿಲ್ಪಗಳು ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. ○